## ಕರ್ನಾಟಕ ವಿಧಾನ ಪರಿಷತ್

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1556 |
| 2 | ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್ (ವಿಧಾನ ಸಭಾ ಕ್ಷೇತ್ರದಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 18-03-2021 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಪ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಐ.ಎಂ.ಎ ಹಗರಣದ ಕುರಿತು ಮಾಧ್ಯಮದಲ್ಲಿ ವರದಿಯಾದಂತೆ 2018ರಲ್ಲಿ ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅಂದಿನ ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಪಿ.ಎಸ್.ಐ. ಗಳನ್ನು ಮಾತ್ರವೇ ಅಮಾನತ್ತು ಮಾಡಿದ್ದು 2018ರಲ್ಲಿ ಫ್ರೇಜರ್ ಟೌನ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಪಿ.ಐ. ಮತ್ತು ಎ.ಸಿ.ಪಿ. ಗಳು ತಲಾ 2 ಲಕ್ಷಕ್ಕೂ ಹೆಚ್ಚು ಲಂಚ ಪಡೆದಿರುವ ಕುರಿತು ಆರೋಪಿಯು ಸ್ವ ಇಚ್ಛಾ ಹೇಳಿಕೆ ನೀಡಿದರೂ ಅಮಾನತ್ತುಗೊಳಿಸಿ ವಿಚಾರಣೆ ನಡೆಸದಿರಲು ಕಾರಣವೇನು; ಯಾವಾಗ ಅಮಾನತ್ತುಗೊಳಿಸಿ ವಿಚಾರಣೆ ನಡೆಸಲಾಗುವುದು. ಈ ಮೊತ್ತವು ಹೂಡಿಕೆದಾರರ ಮೊತ್ತವಾಗಿರುವುದರಿಂದ ವಸೂಲಿ ಮಾಡಲು ಕೈಗೊಂಡ ಕ್ರಮಗಳೇನು: | ಐ-ಮಾನಿಟರಿ ಅಡ್ವೈಸರಿ (ಐ.ಎಮ್.ಎ.), ಬೆಂಗಳೂರು ಮತ್ತು ಇದರ ಸಮೂಹದ ಸಂಸ್ಥೆಗಳಲ್ಲಿ ಆದ ಅವ್ಯವಹಾರಗಳ ಕುರಿತಂತೆ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 8 ಪಿಸಿಆರ್ 2019 ದಿನಾಂಕ 19.08.2019ರಲ್ಲಿ ಸಿಬಿಐ ತನಿಖೆಗೆ ವಹಿಸಿ ಆದೇಶಿಸಲಾಗಿರುತ್ತದೆ.<br><br>ಹಾಲಿ ಐ.ಎಂ.ಎ ಹಗರಣದ ತನಿಖೆಯನ್ನು ಸಿ.ಬಿ.ಐ. ರವರು ಕೈಗೊಂಡಿದ್ದು ಸಿ.ಬಿ.ಐ. ವತಿಯಿಂದ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿ ಸಲ್ಲಿಸಲಾಗಿರುತ್ತದೆ.<br><br>ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಸರ್ಕಾರದ ಆದೇಶ ಸಂಖ್ಯೆ: ಒಇ 212 ಪೊಸಿಪ 2019, ದಿನಾಂಕ 17.10.2020ರಲ್ಲಿ ಶ್ರೀ ಇ.ಬಿ. ಶ್ರೀಧರ್, ಡಿವೈ.ಎಸ್.ಪಿ., ಸಿಐಡಿ, ಆರ್ಥಿಕ ಅಪರಾಧಗಳ ವಿಭಾಗ, ಬೆಂಗಳೂರು, ಶ್ರೀ ಎಂ. ರಮೇಶ್, ಪಿ.ಐ., ಸಿಟಿ ಎಸ್.ಬಿ, ಬೆಂಗಳೂರು ನಗರ (ಹಿಂದಿನ ಪಿಐ, ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ) ಮತ್ತು ಶ್ರೀ ಪಿ. ಗೌರಿಶಂಕರ, ಪಿಐ, ಜೀವನಭೀಮನಗರ ಪೊಲೀಸ್ ಠಾಣೆ, ಬೆಂಗಳೂರು ನಗರ (ಹಿಂದಿನ ಪಿ.ಎಸ್.ಐ., ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆ) ಇವರುಗಳನ್ನು ಇಲಾಖಾ ವಿಚಾರಣೆ ಬಾಕಿ ಇರಿಸಿ, ಅಮಾನತ್ತುಗೊಳಿಸಿ ಆದೇಶಿಸಲಾಗಿರುತ್ತದೆ. |
| ಆ) | ಮಾಧ್ಯಮದಲ್ಲಿ ವರದಿಯಾದಂತೆ 2018ರಲ್ಲಿ ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅಂದಿನ ಪಿ.ಎಸ್.ಐ ತನ್ನ ಸಂಬಂಧಿಕರ ಹೆಸರಿನಲ್ಲಿ 50 ಲಕ್ಷಕ್ಕೂ ಹೆಚ್ಚು ಹೂಡಿಕೆಯನ್ನು ಐ.ಎಂ.ಎ ನಲ್ಲಿ ಮಾಡಿರುವ ಕುರಿತು ಆರೋಪಿಯ ಸ್ವ-ಇಚ್ಛಾ ಹೇಳಿಕೆ ನೀಡಿದ್ದು, ಈ ಮೊತ್ತದ ಆದಾಯ ಮೂಲದ ಕುರಿತು ತನಿಖೆ ಮಾಡಲು ಈಡಿ, ಎಸಿಬಿ, ಲೋಕಾಯುಕ್ತ, ಆದಾಯ ತೆರಿಗೆ ಇಲಾಖೆಗಳಿಗೆ ಮಾಹಿತಿ ನೀಡಲಾಗಿದೆಯೇ ಇಲ್ಲವಾದಲ್ಲಿ ಎಂದು ನೀಡಲಾಗುವುದು ಈ ಹೂಡಿಕೆಯು ಕಮರ್ಷಿಯಲ್ ಸ್ಟ್ರೀಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅಂದಿನ ಪಿ.ಎಸ್.ಐ. ಯವರ ಬೇನಾಮಿ ಹೂಡಿಕೆಯಾಗಿರಬಹುದಾದ ಕುರಿತು ಸರ್ಕಾರದ ನಿಲುವೇನು. ಈ ಕುರಿತು ಸದರಿ ಪಿ.ಎಸ್.ಐ. ಯವರನ್ನು ಅಮಾನತ್ತುಗೊಳಿಸಿ ವಿಚಾರಣೆ ನಡೆಸಲಾಗಿದೆಯೇ? | |

ಸಂಖ್ಯೆ: ಒಇ 64 ಪಿಇಜಿ 2021

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು